# ವಿವೇಚನೆ

ವಾರಪತ್ರಿಕೆ, ಸಂಪಾದಕ: ಸರಿಮನೆ ನಾಗರಾಜ್





ಪ್ರಾಯೋಗಿಕ ಸಂಚಿಕೆ ೪ ಕೊಪ್ಪ ೩೧-೧-೮೨ ಭಾನುವಾರ ಖಾಸಗಿ ಪ್ರಸಾರಕ್ಕಾಗಿ


### ಯುವಜನರಿಗೆ ನುಹಿಷಿ ಕರೆ

# ಸ್ವತಂತ್ರ ಪ್ರವೃತ್ತಿ ಬೆಳೆಸಿಕೊಳ್ಳಿ

ಅತ್ತಿಗದ್ದೆ: ನಮ್ಮ ದೇಶದ ವಿಶ್ವವಿದ್ಯಾಲಯಗಳ ಪದ್ಧತಿಯಲ್ಲಿ ಧೈರ್ಯ ಸಾಹಸಗಳಿಗೆ ಸರಿಯಾದ ಬೆಲೆ ಇಲ್ಲ. ಹಾಗಾಗಿ ನಮ್ಮಲ್ಲಿ ವೇಗ ಅಭಿವೃದ್ಧಿ ಇಲ್ಲ. ನಮ್ಮ ಯುವ ಜನರು ಹೊಸ ಸಂಶೋಧನೆ– ಸಾಹಸ ಪ್ರವೃತ್ತಿಗಳನ್ನು ಬೆಳೆಸಿಕೊಂಡು, ಹೊಸ ವಿಚಾರಗಳನ್ನು ಮೈಗೂಡಿಸಿ ಕೊಂಡು, ಸ್ವತಂತ್ರ ಮನೋಭಾವ ಬೆಳೆಸಿ ಕೊಳ್ಳಬೇಕು ಎಂಬುದಾಗಿ ಜಿಲ್ಲಾಧಿಕಾರಿ ಪಿ. ಬಿ. ಮಹಿಷಿಯವರು ಇಲ್ಲಿ ಜ. 28 ರಂದು ಯುವ ಜನರಿಗೆ ಕರೆ ಕೊಟ್ಟರು.

ತಾಲೂಕು ಯುವಜನ ಮೇಳದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಅವರು ಮಾತಾಡುತ್ತಿದ್ದರು.

ಸ್ವತಂತ್ರ ಮನೋಭಾವ ಎಂದರೆ ಸಮಾಜ, ಹಿರಿಯರು ಯಾವುದನ್ನು ಒಪ್ಪುವುದಿಲ್ಲವೋ ಅಂಥ ದುಶ್ಚಟಗಳನ್ನು ಬೆಳೆಸಿಕೊಳ್ಳುವುದಲ್ಲ. ಪ್ರತಿಯೊಂದಕ್ಕೂ ಹಿರಿಯರ ಮೇಲೆ ಅವಲಂಬಿಸದೆ ಸ್ವಂತ ದುಡಿಮೆಯಿಂದ ಸ್ವಾವಲಬಿಯಾಗಿ ಬದುಕುವುದು ಸ್ವತಂತ್ರ ಪ್ರವೃತ್ತಿ ಎಂದು ವಿವರಿಸಿದ ಅವರು, ಪಾಶ್ಚಾತ್ಯರಲ್ಲಿ ತಂದೆ ತಾಯಿಗಳು ಮಕ್ಕಳಿಗೆ ಚಿಕ್ಕಂದಿನಿಂದಲೇ ಇಂಥ ತಯಾರಿ ಕೊಡುತ್ತಾರೆ. ಇದರಿಂದ ಅಲ್ಲಿ ಸಮಾಜ ಶಂತಾನೆ ಮುಂದುವರಿದು ಕೊಂಡುಹೋಗುತ್ತಿದೆ ಎಂದು ಹಲವು ಉದಾಹರಣೆಗಳನ್ನು ನೀಡಿದರು.

ತಂದೆ–ತಾಯಿ, ಗುರು–ಹಿರಿಯರ ಮೇಲೆ ಅವಲಂಬನೆ ಒಂದು ಮಟ್ಟದವರೆಗೆ ಬೇಕು. ಆದರೆ ನಮ್ಮಲ್ಲಿ 25–30 ವರ್ಷ ಆದರೂ ಇನ್ನೂ ಎಳೆಯರಂತೆಯೇ ವರ್ತಿಸುತ್ತಾರೆ. ತಾಯಿಯ ಕೈಯಡಿಗೆಯೇ ಬೇಕು; "ಇಂಥ" ಕಡೆ ಕೆಲಸ ಸಿಕ್ಕರೆ ಮಾತ್ರ ಹೋಗುವುದು ಎಂಬ ನಿರ್ಧಾರ; ಸಂದರ್ಶನಗಳಿಗೆ ಬರುವಾಗ ಅಥವಾ ಕೆಲಸದ ಪ್ರಾರಂಭದದಿನ ಜೊತೆಯಲ್ಲಿ ಅಪ್ಪನೋ ಯಾರಾದರೂ ಬರಬೇಕು ಮುಂತಾದ ಪ್ರವೃತ್ತಿಗಳನ್ನು ಅವರು ಉದಾಹರಿಸಿ, ನಮ್ಮಲ್ಲಿ ಸ್ವತಂತ್ರ ಪ್ರವೃತ್ತಿ ಇಲ್ಲದಿರುವುದೇ ಒಂದು ದೊಡ್ಡ ಗುಣ ಎಂಬ ಮಟ್ಟದ ಆಲೋಚನೆ ಇದೆ ಎಂದು ಟೀಕಿಸಿದರು.

ಸಾವಿರದಿನ್ನೂರು ವರ್ಷಗಳ ಹಿಂದೆ ಶಂಕರಾಚಾರ್ಯರು ತಮ್ಮ ಕಿರಿ ವಯಸ್ಸಿನಲ್ಲೇ ದೇಶದ ನಾಲ್ಕು ಮೂಲೆಗಳಲ್ಲೂ ತಿರುಗಿ, ಮಠಗಳನ್ನು ಸ್ಥಾಪಿಸಿದರು. ಆಗ ಈಗಿನಂತೆ ರಸ್ತೆಗಳಿಲ್ಲ, ಭೂಪಟಗಳಿಲ್ಲ, ಭಾಷೆ, ಜನ ಗೊತ್ತಿಲ್ಲ, ವಾಹನ ಸಂಚಾರ ಇಲ್ಲ. ಆದರೂ ತಾವು ನಂಬಿ ಹೊರಹೊಟ್ಟ ಕೆಲಸ ಸಾಧಿಸುವ ಸಾಹಸ ಪ್ರವೃತ್ತಿ ಮತ್ತು ಛಲದಿಂದ ಅವರು ಇಂಥ ಸಾಧನೆ ಮಾಡಿದರು. ಅದರೆ, ಅವರೂ ಒಬ್ಬ ಮನುಷ್ಯನಾಗಿದ್ದರು ಎಂಬುದನ್ನು

(ಮುಂದಿನ ಪುಟಕ್ಕೆ)

## ಭಾರತ-ಪಾಕ್ ಶಾಂತಿವೇದಿಕೆ ರಚಿಸಲು ನಿರ್ಧಾರ

ಭಾರತ ಮತ್ತು ಪಾಕಿಸ್ತಾನಗಳಲ್ಲಿ ಉಂಟು ಮಾಡಲಾಗುತ್ತಿರುವ ಯುದ್ಧದ ಗೀಳಿನಿಂದ ಉಂಟಾಗುವ ಅಪಾಯದ ಬಗೆಗೆ ಜನತೆಗೆ ತಿಳುವಳಿಕೆ ನೀಡಲು ಭಾರತ ಪಾಕಿಸ್ತಾನ ಅವಾಮಿ ವೇದಿಕೆಯೊಂದನ್ನು ರಚಿಸಲು ಜ. 24 ರಂದು ದೆಹಲಿಯಲ್ಲಿ ನಡೆದ ಬುದ್ಧಿಜೀವಿಗಳು, ಪತ್ರಕರ್ತರು ಹಾಗೂ ರಾಜಕೀಯ ಕಾರ್ಯಕರ್ತರ ಸಭೆಯೊಂದರಲ್ಲಿ ನಿರ್ಧರಿಸಲಾಯಿತೆಂದು ವರದಿಯಾಗಿದೆ.

ಯುದ್ಧದಿಂದ ಗಡಿ ಪ್ರದೇಶಗಳ ಮೇಲೆ ಉಂಟಾಗುವ ಪರಿಣಾಮ ಮತ್ತು ಈ ಎರಡು ರಾಷ್ಟ್ರಗಳ ನಡುವಣ ಯುದ್ಧದಿಂದ ನಿಜವಾದ ಲಾಭ ಪಡೆಯುವವರು ಯಾರು ಎಂಬುದರ ಬಗೆಗೆ ಸಭೆಯಲ್ಲಿ ಹಲವಾರು ಮಂದಿ ಮಾತನಾಡಿದರು.

ಸಭೆಯಲ್ಲಿ ಪತ್ರಕರ್ತರಾದ ಕುಲದೀಪ್ ನಯ್ಯರ್, ಟಿ. ಜಿ. ವರ್ಗೀಸ್ ಹಾಗೂ ರಜನಿಕೊಠಾರಿ, ಬಿ. ಎಂ. ಸಿನ್ಹ ಮುಂತಾದವರು ಭಾಗವಹಿಸಿದ್ದರು. ※

## ಫ್ಲಾಶ್ ಅಸೋಸಿಯೇಷನ್

ಶೃಂಗೇರಿ: ಸಾಹಿತ್ಯ, ಕಲೆಗೆ ಉತ್ತೇಜನ, ಸಾಂಸ್ಕೃತಿಕ ಕಾರ್ಯಕ್ರಮಗಳ ಪ್ರದರ್ಶನ ಮುಂತಾದ ಉದ್ದೇಶಗಳನ್ನು ಹೊಂದಿದ 'ಫ್ಲಾಷ್ ಅಸೋಸಿಯೇಷನ್' ಇಲ್ಲಿ ಜ. 26ರಂದು ಪ್ರಾರಂಭವಾಗಿದೆ. ಧರ್ಮಪ್ಪ ಹೆಗ್ಡೆ ಇದರ ಅಧ್ಯಕ್ಷರು. ಜಯೇಶ್ ಕಾರ್ಯದರ್ಶಿ.

ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಸಹಾಯಕ ಇಂಜಿನಿಯರ್ ಸೋಮಶೇಖರ್ ವಹಿಸಿದ್ದರು. ಕಾಲೇಜು ಉಪನ್ಯಾಸಕ ವೇಣುಗೋಪಾಲ್ ಉದ್ಘಾಟನೆ ನೆರವೇರಿಸಿದರು.

ಸಂಸ್ಥೆ ಫೆ. 13ರಂದು ಪ್ರೌಢಶಾಲೆಯ ವಿದ್ಯಾರ್ಥಿಗಳಿಗಾಗಿ ಭಾವಗೀತೆ, ಜನಪದ ಗೀತೆಸ್ಪರ್ಧೆ ಮತ್ತು ಚರ್ಚಾಸ್ಪರ್ಧೆಯನ್ನು 20ರಂದು ಬಾಲ್ ಬ್ಯಾಡ್ ಮಿಂಟನ್, ಶಟ್ಲ್, ತ್ರೋಬಾಲ್, ಸ್ಪರ್ಧೆಗಳನ್ನು ಕ್ಷೇತ್ರಮಟ್ಟದಲ್ಲಿ ನಡೆಸಲು ಉದ್ದೇಶಿಸಿದೆ ಎಂದು ಜಯೇಶ್ ತಿಳಿಸಿದ್ದಾರೆ. ※

### ಭಾರತ ಗಣರಾಜ್ಯದ ೩೩ನೇ ವಾರ್ಷಿಕೋತ್ಸವ

# ಎಲ್ಲೆಡೆ ವೈಭವದ ಆಚರಣೆ

ಭಾರತ ಗಣರಾಜ್ಯದ 33ನೇ ವಾರ್ಷಿಕೋತ್ಸವವನ್ನು ಎಲ್ಲೆಡೆ ವೈಭವದಿಂದ ಆಚರಿಸಿರುವ ವರದಿಗಳು ಬಂದಿವೆ.

ಎಲ್ಲ ಕಡೆ ಜನರು, ಮುಖ್ಯವಾಗಿ ಶಾಲೆ ಕಾಲೇಜುಗಳ ವಿದ್ಯಾರ್ಥಿ–ವಿದ್ಯಾರ್ಥಿನಿಯರು, ಸರಕಾರಿ ಅಧಿಕಾರಿಗಳು ಮತ್ತಿತರರು ಸಂಭ್ರಮದಿಂದ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡಿರುವುದಾಗಿ ಗೊತ್ತಾಗಿದೆ.

**ಕೊಪ್ಪದಲ್ಲಿ**

ಕೊಪ್ಪದ "ಗಣರಾಜ್ಯೋತ್ಸವ ಸಮಿತಿ" ವಿಶೇಷ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸಿತ್ತು.

ಬೆಳಿಗ್ಗೆ ಸರ್ಕಾರಿ ಆಸ್ಪತ್ರೆ ಮೈದಾನದಿಂದ ಎಲ್ಲ ಶಾಲೆಗಳ ಮಕ್ಕಳು, ಸೇವಾದಳ, ಎನ್. ಸಿ. ಸಿ., ಸ್ಕೌಟ್, ಗೈಡ್ ದಳಗಳ ಬ್ಯಾಂಡ್ ವಾದ್ಯಗಳೊಂದಿಗೆ ಊರಿನಲ್ಲಿ ಮೆರವಣಿಗೆ ನಡೆಸಿದರು. ನಂತರ ಬಾಳಗಡಿಯ ಜೂ|| ಕಾಲೇಜು ಮೈದಾನದಲ್ಲಿ ನಡೆದ ಕಾರ್ಯಕ್ರಮದಲ್ಲಿ ತಹಶೀಲ್ದಾರ್ ಹೆಚ್. ಎಂ. ನಾಗಪ್ಪ ಧ್ವಜ ಹಾರಿಸಿದ ನಂತರ ಪೋಲಿಸ್ ಸರ್ಕಲ್ ಇನ್ಸ್‌ಪೆಕ್ಟರ್ ಹೊನ್ನಗಿರಿಯಯ್ಯನವರೊಂದಿಗೆ ದಳಗಳಿಂದ ವಂದನೆ ಸ್ವೀಕರಿಸಿದರು. ದಳಗಳಿಂದ ಆಕರ್ಷಕ ಕವಾಯಿತು ನಡೆದ ನಂತರ ಸಿಹಿ ಹಂಚಲಾಯಿತು. ಎನ್. ಸಿ. ಸಿ. ಕಮ್ಯಾಂಡರ್ ಲೆಫ್ಟಿನೆಂಟ್ ಜಿ. ಎಸ್. ವೆಂಕಟೇಶಮೂರ್ತಿ ಈ ಕಾರ್ಯಕ್ರಮಗಳ ನೇತೃತ್ವ ವಹಿಸಿದ್ದರು.

ಸಂಜೆ ಸ|| ಹಿ|| ಪ್ರಾಥಮಿಕ ಶಾಲೆಯ ಆವರಣದಲ್ಲಿ ನಡೆದ ಕಾರ್ಯಕ್ರಮದಲ್ಲಿ ಪುರಸಭಾಧ್ಯಕ್ಷ ಮೊಹಮದ್ ಸಾದಿಕ್ ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿದ್ದ ಕಾಲೇಜು ಪ್ರಿನ್ಸಿಪಾಲ್ ನಾರಾಯಣ ಸ್ವಾಮಿಯವರು ಗಣರಾಜ್ಯೋತ್ಸವದ ಮಹತ್ವವನ್ನು ವಿವರಿಸುತ್ತಾ, ಅನೇಕ ನಾಯಕರ, ದೇಶಭಕ್ತ ವೀರರ ತ್ಯಾಗ ಬಲಿದಾನಗಳಿಂದ ಸ್ವಾತಂತ್ರ್ಯ ಗಳಿಸಿ ಸ್ಥಾಪಿಸಿದ ಗಣರಾಜ್ಯವನ್ನು ಕಾಪಾಡಿಕೊಂಡು ಹೋಗುವಲ್ಲಿ ಪ್ರಮುಖವಾಗಿ ವಿದ್ಯಾರ್ಥಿಗಳ, ಯುವಜನರ ಪಾತ್ರವನ್ನು ಒತ್ತಿ ಹೇಳಿದರು.

ಖ್ಯಾತ ಗಮಕ ವಿದ್ವಾಂಸ ಸೂರ್ಗಿಯ ಕೃಷ್ಣದೇವರಯ್ಯನವರನ್ನು ಹಾಗೂ 1981ರ ಜನಗಣತಿಯಲ್ಲಿ ಉತ್ತಮವಾಗಿ ಕೆಲಸ ಮಾಡಿದ ಬಗ್ಗೆ ಪ್ರಶಸ್ತಿಗಳನ್ನು ಪಡೆದಿರುವ ಕೆ. ಅನಂತ ಪಟವರ್ಧನ್, ಜಗದೀಶ್ ಉಳ್ಳಾಲ್, ವೆಂಕಟಾಚಲ ಅವರುಗಳನ್ನೂ ಈ ಸಮಾರಂಭದಲ್ಲಿ ಸನ್ಮಾನಿಸಲಾಯಿತು. ಸನ್ಮಾನಿತರ ಪರವಾಗಿ ಅನಂತ ಪಟವರ್ಧನ್ ಕೃತಜ್ಞತೆ ಸಲ್ಲಿಸಿದರು. ಕೃಷ್ಣದೇವರಯ್ಯ ಮಹಾಭಾರತದ ಕುಂತಿ–ಕರ್ಣ ಸಂವಾದ ಕಥಾ ಭಾಗದ ವಾಚನ ಮಾಡಿದರು.

ಅಧ್ಯಕ್ಷ ಭಾಷಣ ಮಾಡುತ್ತಾ ಮೊಹಮದ ಸಾದಿಕ್‌ರವರು, ಬೇರೆಯವರನ್ನು ದೂರುತ್ತಾ ಕೂರುವುದರ ಬದಲು ನಮ್ಮ ಕರ್ತವ್ಯಗಳನ್ನು ಅರಿತು ನಡೆದು ದೇಶದ ಸಂಪನ್ಮೂಲಗಳ ಅಭಿವೃದ್ಧಿಯಲ್ಲಿ ನಾವೆಲ್ಲ ಭಾಗಿಗಳಾಗಬೇಕೆಂದು ಕರೆಯಿತ್ತರು.

ಪ್ರಾರಂಭದಲ್ಲಿ ಸಹಾಯಕ ವಿದ್ಯಾಧಿಕಾರಿ ಎಂ. ಚಂದ್ರಶೇಖರಯ್ಯ ಸ್ವಾಗತಿಸಿದರು. ತಹಸೀಲ್ದಾರ್ ಹೆಚ್. ಎಂ. ನಾಗಪ್ಪ ಜನಗಣತಿ ಪ್ರಶಸ್ತಿ ವಿಜೇತರಿಗೆ ಪದಕಗಳನ್ನು ನೀಡಿದರು. ಪ್ರೌಢಶಾಲಾ ಮುಖ್ಯಾಧಿಕಾರಿ ಆರ್. ಗುಂಡೂರಾವ್ ವಂದಿಸಿದರು. ಶಾಲೆ–ಕಾಲೇಜು ವಿದ್ಯಾರ್ಥಿ ವಿದ್ಯಾರ್ಥಿನಿಯರಿಂದ ಮನರಂಜನಾ ಕಾರ್ಯಕ್ರಮ ನಡೆಯಿತು.

(ಮುಂದಿನ ಪುಟಕ್ಕೆ)

## ಶೃಂಗೇರಿ ಬಾಲಕರ ಹಿರಿಯ ಪ್ರಾಥಮಿಕ ಶಾಲೆಯ ವಾರ್ಷಿಕೋತ್ಸವ

ಶೃಂಗೇರಿ: ಇಲ್ಲಿನ ಸರ್ಕಾರಿ ಬಾಲಕರ ಹಿರಿಯ ಪ್ರಾಥಮಿಕ ಶಾಲೆಯ ವಾರ್ಷಿಕೋತ್ಸವ ಜ.20ರಿಂದ 22 ರವರೆಗೆ ನಡೆಯಿತು.

ಜ.20 ರಂದು ಏರ್ಪಡಿಸಿದ್ದ ವಿವಿಧ ಸಾಹಿತ್ಯಿಕ ಸ್ಪರ್ಧೆಗಳಲ್ಲಿ ತಾಲೂಕಿನ ಎಲ್ಲ ಹಿ॥ಪ್ರಾ॥ಶಾಲೆಗಳ ಮಕ್ಕಳೂ ಭಾಗವಹಿಸಿದ್ದರು. ಚರ್ಚಾಸ್ಪರ್ಧೆಯಲ್ಲಿ ಶೃಂಗೇರಿ ಬಾಲಕರ ಹಿ॥ಪ್ರಾ॥ ಶಾಲೆಯ ನವೀನ್ ಕುಮಾರ್ ಮೊದಲಸ್ಥಾನವನ್ನೂ, ಬಾಲಕಿಯರ ಹಿ॥ಪ್ರಾ॥ಶಾಲೆಯ ಸಾವಿತ್ರಿ 2ನೇ ಸ್ಥಾನವನ್ನೂ ಪಡೆದರು. ಆತಿಥೇಯ ಶಾಲೆಯ ಮಕ್ಕಳು ಪ್ರಬಂಧ ಮತ್ತು ಚಿತ್ರಕಲಾ ಸ್ಪರ್ಧೆಗಳಲ್ಲೂ 2ನೇ ಸ್ಥಾನವನ್ನು ಪಡೆದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಬಾಲಿಕಾ ಪ್ರೌಢ ಶಾಲೆಯ ಮುಖ್ಯೋಪಾಧ್ಯಾಯರಾದ ಕೆ. ಎಸ್. ಬಾಲಕೃಷ್ಣ ವಹಿಸಿದ್ದರು. ಎಂ.ವಿ. ನರಸಿಂಹಮೂರ್ತಿ ಭಾಷಣ ಮಾಡಿದರು. ಸಂಜೆ ಕೆರೆಕೋಡು ಸೀತಾರಾಮ ಭಟ್ಟರ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ ಕಿಗ್ಗ ಪ್ರೌಢ ಶಾಲೆಯ ಮುಖ್ಯೋಪಾಧ್ಯಾಯರಾದ ವೇದ ವ್ಯಾಸಾಚಾರ್ಯರು ಸ್ಪರ್ಧೆಗಳಲ್ಲಿ ಗೆದ್ದ ಮಕ್ಕಳಿಗೆ ಬಹುಮಾನ ವಿತರಣೆ ಮಾಡಿದರು.

ಜ.21 ರಂದು ಶಾಲೆಯಮಕ್ಕಳಿಗಾಗಿ ಲಕ್ಕಿಡಿಪ್ ಏರ್ಪಡಿಸಲಾಗಿತ್ತು.

ಜ.22ರಂದು ನಡೆದ ವಾರ್ಷಿಕೋತ್ಸವ ಸಮಾರಂಭದ ಅಧ್ಯಕ್ಷತೆಯನ್ನು ಶೃಂಗೇರಿಯ ತಹಸೀಲ್ದಾರ್ ಜಿ. ಅನಂತರಾವ್ ವಹಿಸಿದ್ದರು. ಕೊಪ್ಪ ತಾ॥ ಸಹಾಯಕ ವಿದ್ಯಾಧಿಕಾರಿ ಎಂ. ಚಂದ್ರಶೇಖರಯ್ಯ ಮುಖ್ಯ ಅತಿಥಿಗಳಾಗಿದ್ದರು. ತಾ॥ಅ॥ಮಂ॥ ಅಧ್ಯಕ್ಷ ಕಳಸಪ್ಪ ಹೆಗ್ಡೆ ವಿವಿಧ ಆಟೋಟ ಸ್ಪರ್ಧೆಗಳಲ್ಲಿ ಗೆದ್ದ ಮಕ್ಕಳಿಗೆ ಬಹುಮಾನ ವಿನಿಯೋಗ ಮಾಡಿದರು.

ನಂತರ ಶಾಲಾ ಮಕ್ಕಳಿಂದ ಮನರಂಜನೆ ಕಾರ್ಯಕ್ರಮ ಇತ್ತು. 'ನರಕದಲ್ಲಿ ನರ ವಿಚಾರಣೆ', 'ಆಷಾಢಭೂತಿ', ಎಂಬ ನಾಟಕಗಳನ್ನೂ 'ವೀರ ಅಭಿಮನ್ಯು' ಎಂಬ ಗೀತ ರೂಪಕವನ್ನೂ ಮಕ್ಕಳುಅಭಿನಯಿಸಿದರು.

---

### ಕೊಪ್ಪ ಕಿರಿಯ ಕಾಲೇಜಿನ ವಾರ್ಷಿಕೋತ್ಸವ

ಕೊಪ್ಪ: ಇಲ್ಲಿನ ಕಿರಿಯ ಕಾಲೇಜು ವಾರ್ಷಿಕೋತ್ಸವಫೆ3ಮತ್ತು4ರಂದು ನಡೆಯಲಿದೆ.

ಮೊದಲದಿನದ ಸಮಾರಂಭದ ಅಧ್ಯಕ್ಷರು ಹರಿಹರಪುರ ಪ್ರೈವ್ಯಾಸಿಕಾರಿಗಳಾದ ಡಾ॥ ಸಿದ್ದಯ್ಯ, ಶೃಂಗೇರಿಕಾಲೇಜಿನಪ್ರಾಚಾರ್ಯ ಎಂ. ಕೃಷ್ಣಪ್ಪಯ್ಯ ಮುಖ್ಯ ಅತಿಥಿಗಳು. ಕೊಪ್ಪ ಪೋಲೀಸ್ ಸಬ್ ಇನ್ಸ್‌ಪೆಕ್ಟರ್ ಪುಟ್ಟಸ್ವಾಮೀಗೌಡರಿಂದ ಬಹುಮಾನ ವಿತರಣೆ. ಪ್ರೌಢಶಾಲೆ, ಕಾಲೇಜು ವಿದ್ಯಾರ್ಥಿ ವಿದ್ಯಾರ್ಥಿನಿಯರಿಂದ 'ಚಂದ್ರೊಳ್ಳಿ ಚಲುವೆ' 'ಕುದುರೆನೊಟ್ಟ' ಮತ್ತು 'ಲಚ್ಚಿ' ಎಂಬ ನಾಟಕಗಳು.

ಜ. 4ರ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಹರಿಹರಪುರಕಾಲೇಜುಪ್ರಾಚಾರ್ಯ ಬಿ. ಎಲ್. ಸತ್ಯನಾರಾಯಣ ವಹಿಸುವರು. ವಿದ್ವಾನ್ ಕೆ.ಎಸ್. ಸೀತಾರಾಮ ಭಟ್ಟ ಮುಖ್ಯ ಅತಿಥಿಗಳು. ಮೈಸೂರು ಬ್ಯಾಂಕ್ ಮ್ಯಾನೇಜರ್ ಎಂ. ಎನ್. ಆಚಾರ್ಯರಿಂದ ಬಹುಮಾನ ವಿತರಣೆ.

ಮನರಂಜನಾ ಕಾರ್ಯಕ್ರಮದಲ್ಲಿ 'ಅಕ್ಕಪಕ್ಕ' ಮತ್ತು 'ಎತ್ತರಕ್ಕೆ ಹೋದವರು' ಎಂಬ ನಾಟಕಗಳಿವೆ. ✻

### ಮಹಿಷಿ ಕರೆ

(ಹಿಂದಿನ ಪುಟದಿಂದ)

ಅಲ್ಲಗಳೆದು, ಅವರ. ದೇವರು; ಅಂಥ ಸಾಹಸ ದೇವರಿಂದ ಮಾತ್ರ ಸಾಧ್ಯ, ನಮಗಲ್ಲ ಎಂದುಕೊಂಡು ನಾವು ನಮ್ಮ ಆಲಸ್ಯ ನಿಷ್ಕ್ರಿಯತೆ ಗಳನ್ನು ಕಾದುಕೊಂಡಿದ್ದೇವೆ ಎಂದು ಅವರು ವಿಶ್ಲೇಷಿಸಿದರು.

---

ಸರ್ಕಾರ ನಡೆಸುವ ಇಂಥ ಯುವ ಮೇಳಗಳು ಇಲ್ಲದಿದ್ದ ತಮ್ಮ ವಿದ್ಯಾಭ್ಯಾಸದ ದಿನಗಳಲ್ಲಿ ತಾವು ಭಾಗವಹಿಸಿದ್ದ 8ದಿನಗಳ ಕಾಲದ ಒಂದು ಯುವಜನ ಮೇಳವನ್ನು ಜ್ಞಾಪಿಸಿಕೊಂಡ ಮಹಿಷಿಯವರು, ತಮಗೆ ಸರ್ಕಾರಿ ನೌಕರಿ ಸಿಕ್ಕದಿದ್ದರೂ, ದೈಹಿಕ ಶ್ರಮದಿಂದ ದುಡಿದು ಬದುಕಬಲ್ಲೆ ಎಂಬ ಆತ್ಮ ವಿಶ್ವಾಸ ಮೂಡಿದ್ದು, ಹಾಗೂ ಸಾದಾ ಊಟ ತಿಂಡಿಗಳೂ ರುಚಿ ಎನ್ನಿಸುತ್ತವೆ ಎಂಬುದು ಗೊತ್ತಾದದ್ದು ಅಲ್ಲೇ ಎಂದು ತಿಳಿಸಿ, ಈ ಮೇಳಗಳು ಆತ್ಮವಿಶ್ವಾಸ, ವ್ಯಕ್ತಿತ್ವ ಬೆಳೆಸಿಕೊಳ್ಳಲಿಕ್ಕೆ ಯುವ ಜನರಿಗೆ ಸಹಾಯಕವಾಗಲಿ ಎಂದು ಹಾರೈಸಿದರು. ✻

## ನ. ರಾ. ಪುರ ತಾಲ್ಲೂಕು ಯುವಜನ ಮೇಳ

ನ. ರಾ. ಪುರ: ಕರ್ನಾಟಕ ಸರ್ಕಾರದ ಯುವಜನ ಸೇವಾ ಇಲಾಖೆ, ತಾಲ್ಲೂಕು ಅಭಿವೃದ್ಧಿ ಮಂಡಳಿ, ನ.ರಾ. ಪುರ ಯುವಕ ರೈತಸಂಘ ಮತ್ತು ಮಹಿಳಾಮಂಡಳ ಮಡಬೂರು ಇವರ ಸಂಯುಕ್ತ ಆಶ್ರಯದಲ್ಲಿ ನ. ರಾ. ಪುರ ತಾಲ್ಲೂಕು ಮಟ್ಟದ ಯುವಜನ ಮೇಳ ಜ. 23 ಮತ್ತು 24ರಂದು ಮಡಬೂರಿನಲ್ಲಿ ನಡೆಯಿತು.

ನ. ರಾ. ಪುರ ತಹಸೀಲ್ದಾರ್ ಜಿ. ಸಿ. ರಾಜಶೇಖರ್ ಮೇಳವನ್ನು ಉದ್ಘಾಟಿಸಿದರು. ಮಡಬೂರು ಗ್ರಾಮ ಪಂಚಾಯ್ತಿ ಅಧ್ಯಕ್ಷ ಕೆ.ಚನ್ನಪ್ಪಗೌಡರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ತಾಲ್ಲೂಕುಮಂಡಳಿ ಸದಸ್ಯರಾದ ಕೆ. ಸಿ. ರಾಮಯ್ಯ ಮತ್ತು ಎಸ್. ಆರ್. ಮಂಜಯ್ಯಗೌಡರು ಮುಖ್ಯ ಅತಿಥಿಗಳಾಗಿದ್ದರು.

ಮೇಳದ ಸಮಾರೋಪ ಭಾಷಣವನ್ನು ತರೀಕೆರೆ ಉಪವಿಭಾಗಾಧಿಕಾರಿಎಸ್.ಜೆಡ್. ಪಾಷಾ ಮಾಡಿದರು. ತಾಲ್ಲೂಕು ಅಭಿವೃದ್ಧಿ ಮಂಡಳಿ ಅಧ್ಯಕ್ಷ ಕೆ.ಟಿ. ಚಿನ್ನಯ್ಯಗೌಡ ಸಮಾರಂಭದಅಧ್ಯಕ್ಷತೆ ವಹಿಸಿದ್ದರು. ಮೇಳದ ಅಂಗವಾಗಿ ನಡೆದ ಸಾಂಸ್ಕೃತಿಕ ಸ್ಪರ್ಧೆಗಳ ವಿಜೇತರಿಗೆ ತಾಲ್ಲೂಕು ಮಂಡಳಿ ಸದಸ್ಯರಾದ ಡಿ.ಸಿ. ದಿವಾಕರ್ ಬಹುಮಾನ ವಿತರಣೆ ಮಾಡಿದರು. ನ.ರಾ. ಪುರ ಪ್ರಾಥಮಿಕ ಭೂಬ್ಯಾಂಕಿನ ಅಧ್ಯಕ್ಷರಾದ ಹೆಚ್. ವಿ. ತಿಮ್ಮಯ್ಯಗೌಡರು ಮುಖ್ಯ ಅತಿಥಿಗಳಾಗಿದ್ದರು. ✻

---

### ಗಣರಾಜ್ಯೋತ್ಸವ

(ಹಿಂದಿನ ಪುಟದಿಂದ)

**ನರಸಿಂಹರಾಜಪುರದಲ್ಲಿ**

ಗಣರಾಜ್ಯೋತ್ಸವಸಮಿತಿಯ ಆಶ್ರಯದಲ್ಲಿ ನಡೆದ ಕಾರ್ಯಕ್ರಮದಲ್ಲಿ ತಹಸಿಲ್ದಾರ್ ಜಿ. ಸಿ. ರಾಜಶೇಖರ್ ಧ್ವಜಾರೋಹಣ ಮಾಡಿದರು. ತಾಲೂಕು ಕಾಂಗ್ರೆಸ್ ಅಧ್ಯಕ್ಷ ಹೆಚ್. ಕೆ. ಅಬ್ದುಸ್ ಸಮದ್ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಕಿರಿಯ ಕಾಲೇಜಿನ ಉಪನ್ಯಾಸಕ ಹೆಚ್. ಸಿ. ನಂಜುಂಡ ಭಟ್ಟರು ಗಣರಾಜ್ಯೋತ್ಸವದ ಮಹತ್ವ ವಿವರಿಸಿದರು.

1981 ರ ಜನಗಣತಿಯಲ್ಲಿ ಪ್ರಶಂಸಾರ್ಹ ಕೆಲಸ ಮಾಡಿ ಕೇಂದ್ರ ಸರ್ಕಾರದಿಂದ 'ಸ್ವರ್ಣಪದಕ, ಪಡೆದ ತಾಲೂಕಿನ 4 ಜನ ನೌಕರರಿಗೆ ಇದೇ ಸಮಾರಂಭದಲ್ಲಿ ಪ್ರಶಸ್ತಿ ವಿತರಣೆ ನಡೆಯಿತು.

ತಾ॥ ಕಾಂಗ್ರೆಸ್ ಅಧ್ಯಕ್ಷ ಅಬ್ದುಸ್ ಸಮದ್ ರವರ ಅಧ್ಯಕ್ಷತೆಯಲ್ಲಿ ಪ್ರವಾಸಿ ಮಂದಿರದಲ್ಲಿ ನಡೆದ ಕಾರ್ಯಕ್ರಮದಲ್ಲಿ ರಕ್ಷಣಾಧಿಕಾರಿ ಆರ್. ಲಕ್ಷ್ಮಣ್, ಕೆನರಾ ಬ್ಯಾಂಕ್ ಮೆನೇಜರ್ ಶೆಟ್ಟಿ, ವಿದ್ಯುಚ್ಛಕ್ತಿ ಮಂಡಳಿ ಅಧಿಕಾರಿ ಚೆನ್ನಬಸವೇಗೌಡ ಇವರುಗಳು ಮುಖ್ಯ ಅತಿಥಿಗಳಾಗಿದ್ದರು.

ಅಬೇದ , ಗಂಗಾಧರ್, ಕೃಷ್ಣಯ್ಯ, ರಾಜೇಂದ್ರ ಭಾಷಣ ಮಾಡಿದರು. ಎ. ರಘುಪತಿ ತುಂಗ ಅವರು ಏಕಪಾತ್ರಾಭಿನಯ ನೀಡಿದರು.

ಎಸ್. ಇಸ್ಸೇವಿಯರ್ ಸ್ವಾಗತಿಸಿದರು. ಜಗತ್ಪಾಲ ಶೆಟ್ಟಿ ವಂದಿಸಿದರು.

**ಕಿಗ್ಗದಲ್ಲಿ** .....

ಮಾವರಿ ಹಿ॥ ಪ್ರಾ॥ ಶಾಲೆಯ ಆವರಣದಲ್ಲಿ ಶಾಲಾಭಿವೃದ್ಧಿ ಸಮಿತಿ ಸದಸ್ಯ ವಿಜಯ ಹೆಗ್ಡೆ ಧ್ವಜಾರೋಹಣ ಮಾಡಿದರು. ಅನಂತ ಕೃಷ್ಣರಾವ್ ಅಧ್ಯಕ್ಷತೆ ವಹಿಸಿದ್ದರು. ರವೀಂದ್ರ ಹೆಗ್ಡೆ ಮುಖ್ಯ ಅತಿಥಿಗಳಾಗಿದ್ದರು.

ಪ್ರಾರಂಭದಲ್ಲಿ ಶಾಲಾ ಮಕ್ಕಳು ಪ್ರಭಾತ್‌ಫೇರಿ ಮತ್ತು ವ್ಯಾಯಾಮ ಪ್ರದರ್ಶನ ನಡೆಸಿದರು. ✻

### ಸಿಂಹನಗದ್ದೆ ಬಸ್ತಿಮಠಕ್ಕೆ ಸಚಿವ ಬೇಗಾನೆ ಭೇಟಿ

ನ.ರಾ. ಪುರ: ಜ. 20ರಂದು ಇಲ್ಲಿನ ಬಸ್ತಿಮಠಕ್ಕೆ ಭೇಟಿಕೊಟ್ಟಿದ್ದ ಬೇಗಾನೆ ರಾಮಯ್ಯನವರು ಶ್ರೀ ಚಂದ್ರನಾಥಸ್ವಾಮಿ ದೇವಾಲಯದ ಶಂಕುಸ್ಥಾಪನೆಗೆ ಮುಖ್ಯಮಂತ್ರಿಗಳನ್ನು ಆಹ್ವಾನಿಸುವಬಗ್ಗೆ ಲಕ್ಷ್ಮೀಸೇನ ಸ್ವಾಮೀಜಿಗಳಲ್ಲಿ ವಿಚಾರ ವಿನಿಮಯ ನಡೆಸಿದರು.

## ನರಸಿಂಹರಾಜಪುರ ಕಾಲೇಜು ವಾರ್ಷಿಕೋತ್ಸವ

(ವರದಿ: ಎಸ್. ಎಸ್. ಹೊಸ್ಕೆರೆ)

ನ. ರಾ. ಪುರ: ಸ್ಥಳೀಯ ಜೂನಿಯರ್ ಕಾಲೇಜಿನಲ್ಲಿ ಅಂತರಕಾಲೇಜು ಭಾವಗೀತೆ, ಜನಪದಗೀತೆ ಮತ್ತು ಚರ್ಚಾ ಸ್ಪರ್ಧೆಗಳನ್ನೂ ಮತ್ತು ಕಾಲೇಜು ವಾರ್ಷಿಕೋತ್ಸವ ಸಮಾರಂಭವನ್ನು ಇತ್ತೀಚೆಗೆ ಎರಡು ದಿವಸಗಳ ಕಾಲ ಆಚರಿಸಲಾಯಿತು.

ಜ.22ರಂದು ಬೆಳಿಗ್ಗೆ ಚರ್ಚಾಸ್ಪರ್ಧೆಯ ಸಮಾರಂಭದ ಅಧ್ಯಕ್ಷತೆಯನ್ನು ಶಿವಮೊಗ್ಗ ದೇಶೀಯ ವಿದ್ಯಾಶಾಲಾ ಕಾಲೇಜಿನ ಉಪನ್ಯಾಸಕರಾದ ಪ್ರೊ. ಬಿ. ಎಂ. ಕುಮಾರಸ್ವಾಮಿ ವಹಿಸಿದ್ದರು. ಕೊಪ್ಪ ಜೂನಿಯರ್ ಕಾಲೇಜಿನ ಎಸ್. ವಿ. ಮಲ್ಲಿಕಾರ್ಜುನಭಟ್ ಶಿವಮೊಗ್ಗದ ವಕೀಲರಾದ ಹೆಚ್. ಸಿ. ಹಿರಿಯಣ್ಣ ಮತ್ತು ಕೊಪ್ಪ ತಾಲ್ಲೂಕಿನ ಸಹಾಯಕ ವಿದ್ಯಾಧಿಕಾರಿ ಎಂ. ಚಂದ್ರಶೇಖರಯ್ಯ ಇವರುಗಳು ತೀರ್ಪುಗಾರರಾಗಿ ಭಾಗವಹಿಸಿದ್ದರು.

ಮಧ್ಯಾಹ್ನ ನಡೆದ ಭಾವಗೀತೆ ಮತ್ತು ಜನಪದಗೀತೆ ಸ್ಪರ್ಧೆಯ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಕೊಪ್ಪ ಜೂನಿಯರ್ ಕಾಲೇಜಿನ ಪ್ರಿನ್ಸಿಪಾಲರಾದ ಕೆ. ಎಸ್. ನಾರಾಯಣ ಸ್ವಾಮಿಯವರು ವಹಿಸಿದ್ದರು ಶಿವಮೊಗ್ಗದ ಸಹಾಯಕ ಉದ್ಯೋಗಾಧಿಕಾರಿ ಸಿ. ಗುರುಮೂರ್ತಿ, ಕೊಪ್ಪದ ಶ್ರೀಮತಿ ಯಶೋಧ ಕುಮಾರಿ ಮತ್ತು ಎಸ್.ನಾರಾಯಣಸ್ವಾಮಿಯವರು ತೀರ್ಪುಗಾರರಾಗಿ ಆಗಮಿಸಿದ್ದರು.

ಜ. 23ರಂದು ನಡೆದ ಶಾಲಾ ವಾರ್ಷಿಕೋತ್ಸವ ಸಮಾರಂಭದ ಅಧ್ಯಕ್ಷತೆಯನ್ನು ಪುರಸಭಾ ಸದಸ್ಯರು ಹಾಗೂ ಶಾಲಾಭಿವೃದ್ಧಿ ಸಮಿತಿ ಸದಸ್ಯರೂ ಆದ ಆರ್. ಎಂ. ಅಬ್ದುಲ್‌ಮಜೀದ್ ವಹಿಸಿದ್ದರು. ದೇಶೀಯ ವಿದ್ಯಾಶಾಲಾಕಾಲೇಜಿನ ಕನ್ನಡ ವಿಭಾಗದ ಮುಖ್ಯಸ್ಥರಾದ ಪ್ರೊ. ಪಾಂಡುರಂಗ ಉಡುಪರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಶ್ರೀಮತಿ ಗಾಯತ್ರಿ ಚಂದ್ರಶೇಖರ್ ಕಾಲೇಜಿನ ವಾರ್ಷಿಕ ಸಂಚಿಕೆ"ಜ್ಯೋತಿ" ಯನ್ನು ಬಿಡುಗಡೆ ಮಾಡಿದರು.

ನಂತರ ನಡೆದ ಮನರಂಜನೆ ಕಾರ್ಯಕ್ರಮದಲ್ಲಿ ವಿದ್ಯಾರ್ಥಿ–ವಿದ್ಯಾರ್ಥಿನಿ ಯರು "ಕಂಬನಿ" ಹಾಗೂ "ಚೆಲ್ಲಿದ ನೀರು" ನಾಟಕಗಳನ್ನು ಅಭಿನಯಿಸಿದರು.



ಸಂಪಾದಕ, ಪ್ರಕಾಶಕ ಮತ್ತು ಮುದ್ರಕ: ಸಿರಿಮನೆ ನಾಗರಾಜ್, ಅಚ್ಚು: ನೇಸರ ಮುದ್ರಣ, ಕೊಪ್ಪ.